ಡಾ|| ಕೃಷ್ಣ ಕೊಲ್ಹಾರಕುಲಕರ್ಣಿ

# 'ವಿಜಾಪುರ ಆದಿಲಶಾಹಿ ಕಾಲದ (ಕ್ರಿ.ಶ. ೧೪೮೯-೧೬೮೬) ಹಿಂದು-ಮುಸ್ಲಿಮರ ಸಂಬಂಧ' ಆಕರಗಳು, ಮತ್ತು ಅಧ್ಯಯನ

ಕಳೆದ ಒಂದು ನೂರು ವರುಷಗಳಲ್ಲಿ ವಿಜಾಪುರ ಇತಿಹಾಸ, ಕಲೆ ಹಾಗು ವಾಸ್ತು ಶಿಲ್ಪಗಳ ಕುರಿತು ಹಲವಾರು ದೇಶ-ವಿದೇಶೀಯ ಲೇಖಕರು ಬರೆದಿದ್ದಾರೆ. ಅವರಲ್ಲಿ ಫರ್ಗ್ಯೂಸನ್, ಕಸಿನ್ಸ್, ಮೆಡೋಸ ಟೇಲರ್ ಮೊದಲಾದ ಆಂಗ್ಲ ಲೇಖಕರಿದ್ದರೆ, ಭಾರತೀಯರಾದ ಡಾ|| ಪಿ. ಎಂ. ಜೋಶಿ, ಡಾ|| ಭಗವತ್‌ದಯಾಲ ವರ್ಮಾ, ಡಾ|| ಡಿ. ಸಿ. ವರ್ಮಾ, ಡಾ|| ಎಂ.ಎ. ನೆಯೀಮರು ಪ್ರಮುಖರು. ಡಾ. ಎ.ಆರ್. ಕುಲಕರ್ಣಿ, ಡಾ|| ಜಿ.ಟಿ. ಕುಲಕರ್ಣಿ, ಡಾ|| ಮಾಟೆ ಮುಂತಾದವರು ಕೂಡ ಈ ದಿಶೆಯಲ್ಲಿ ಕೆಲಸ ಮಾಡಿದ್ದಾರೆ. ಅಮೇರಿಕೆಯ ಡಾ|| ರಿಚರ್ಡ ಈಟನ್ ಎಂಬವರು ವಿಜಾಪುರದ ಸೂಫಿ ಸಂತರ ಕುರಿತಾಗಿಯೇದೀರ್ಘವಾಗಿ ಅಭ್ಯಸಿಸಿ ಬರೆದಿದ್ದಾರೆ ಇವುಗಳಲ್ಲಿ ವಿಶೇಷವಾಗಿ ಚಾರಿತ್ರಿಕ ಘಟನೆಗಳು, ರಾಜಕೀಯ ಸಂಬಂಧ, ಕಲೆ, ಸಂಗೀತ, ವಾಸ್ತುಶಿಲ್ಪ ಹಾಗು ಕೊನೆಯದಾದ ಸೂಫಿಸಂತರ ಗ್ರಂಥದಲ್ಲಿ ಒಂದು ನಿರ್ದಿಷ್ಟ ಪಂಥದ ವಿವರವಾದ ಅಭ್ಯಾಸ ಆಗಿದೆ. ಆದರೆ ಆದಿಲಶಾಹಿ ಕಾಲದ ಜನ ಸಾಮಾನ್ಯ ಪರಿಸ್ಥಿತಿ, ವಿವಿಧ ಮತ-ಧರ್ಮಗಳ ಪರಸ್ಪರ ಸಂಬಂಧ, ವಿಶೇಷ ವಾಗಿ ಹಿಂದು-ಮುಸ್ಲಿಮರ ಸಂಬಂಧದ ಕುರಿತು ವಿವರ ವಾದ ಆಭ್ಯಾಸ ಇನ್ನೂ ಆಗಿಲ್ಲ ಆದರ ಅಗತ್ಯ ಇದೆ. ಅಂಥದೊಂದು ಆಭ್ಯಾಸದ ಪ್ರಮುಖ ಅಂಶಗಳನ್ನು ಈ ರೀತಿಯಾಗಿ ಗುರುತಿಸಬಹುದಾಗಿದೆ.

೧. ಹಿಂದು-ಮುಸ್ಲಿಮರ ಮಧ್ಯದ ಸಾಮಾಜಿಕ ಸಂಬಂಧ.

೨. ಹಿಂದು ಸಾಧು-ಸಂತರು ಹಾಗು ಮುಸ್ಲಿಮ ಸೂಫಿಗಳ ಮಧ್ಯದ ಆಂತರಿಕ ಪ್ರಕ್ರಿಯೆಗಳು.

೩. ಆಡಳಿತದಲ್ಲಿ ಹಿಂದುಗಳು ಹಾಗು ಧಾರ್ಮಿಕ ಮುಖಂಡರು. ವಿಶೇಷವಾಗಿ ಆಸ್ಥಾನದ ಮರಾಠಾ ಸರದಾರರು, ಅಲ್ಪಸಂಖ್ಯಾತರು, ಉದಾಹರಣೆಗೆ ಬ್ರಾಹ್ಮಣರು, ಬೇಡರು, ಕುರುಬರು ಇತ್ಯಾದಿ.

೪. ಆಡಳಿತದಲ್ಲಿ ಆದಿಲ್‌ಶಾಹಿಗಳ ಮುಸ್ಲಿಮ್‌ಪರ ವಾದ ಧೋರಣೆ ಹಾಗು ಸಮಾಜದ ಮೇಲೆ ಆದರ ಪರಿಣಾಮ.

೫. ಅವರಂತೆ ಆಡಳಿತದಲ್ಲಿ ಹಿಂದು ಪರವಾದ ಧೋರಣೆ ಹಾಗು ಮುಸ್ಲಿಂಮರ ಮೇಲೆ ಪರಿಣಾಮ. ವಿಶೇಷವಾಗಿ ಜಗದ್ಗುರು ಎನಿಸಿಕೊಂಡ ೨ನೆಯ ಇಬ್ರಾಹಿಮ ಆದಿಲ್‌ಶಹನ ಆಡಳಿತ.

೬ ಈ ಅವಧಿಯಲ್ಲಿ ವಿಶೇಷವಾಗಿ ಪ್ರಭಾವ ಬೀರಿದ ಕೆಲವು ಹಿಂದು ಮತ ಪಂಥಗಳು ಉದಾ-ನಾಥ, ರಾಮದಾಸಿ, ಅವಧೂತ ಇತ್ಯಾದಿ.

೭. ವಿವಿಧ ಭಾಷೆಗಳ ಬಳಕೆಯಿಂದಾಗಿ 'ದಖಣಿ'

---

* ನಿವೃತ್ತ, ಅಂಚೆ ಇಲಾಖಾ ಅಧಿಕಾರಿ, ಕೊಲ್ಹಾರ, ೫೮೬೨೧೦, ಬಿಜಾಪುರ ಜಿಲ್ಲೆ.

ಎಂಬ ಹೊಸ ಭಾಷೆಯ ಉದಯ, ಪ್ರಚಲಿತ ಭಾಷೆಗಳ ಮೇಲೆ ಅದರ ಪ್ರಭಾವ.

೮. ಒತ್ತಾಯದ ಮುಸ್ಲಿಮ್ ಧರ್ಮಾಂತರಗಳು, ಘಟನೆಗಳ ಸಂದರ್ಭ, ಸ್ಥಳ-ಕಾಲ-ನಾಮ ನಿರ್ದೇಶನ, ಧರ್ಮಾಂತರದ ಕಾರಣ-ಪ್ರತಿಫಲ ನೀಡಲಾಯಿತೆ ? ವ್ಯಕ್ತಿಗತ-ಸಾಮೂಹಿಕ ಧರ್ಮಾಂತರಗಳು.

೯. ಹಿಂದು ಧಾರ್ಮಿಕ ಕ್ಷೇತ್ರ, ಮಠ-ಮಂದಿರಗಳ ನಾಶ, ನಾಶಗೊಂಡ ಖ್ಯಾತ ದೇವಾಲಯಗಳು-ದೇವತೆಗಳು

೧೦. ಸುಲ್ತಾನರ ರಾಣೀವಾಸದಲ್ಲಿ ಒತ್ತಾಯದಿಂದ ಸೇರಿಸಿದ ಹಿಂದು ಮಹಿಳೆಯರು.

೧೧. ಲೈಂಗಿಕ ತೃಪ್ತಿಗಾಗಿ ಸುಲ್ತಾನರು-ರಾಣೀವಾಸದವರು ಬಳಸಿಕೊಂಡ ಹಿಂದು ತರುಣರು.

೧೨. ಹಿಂದು ಮಠ-ಮಂದಿರಗಳ ರೂಪಾಂತರ ಮಸೀದಿ ಮದರಸಾ.

ಹೀಗೆ ಗುರುತಿಸಲಾದ ಅಂಶಗಳ ಅಭ್ಯಾಸಕ್ಕೆ ದೊರೆಯಬಹುದಾದ ಆಕರಗಳನ್ನು ಹೀಗೆ ಸವಿಂಗಡಿಬಹುದು.

**೧. ಮುದ್ರಿತ ಸಾಧನೆಗಳು**

ಅ) ಶಾಸನಗಳು, ತಾಮ್ರಪಟಗಳು, ಫರ್ಮಾನುಗಳು, ಸನದುಗಳು.

ಬ) ೧೯ನೆಯ ಶತಮಾನದಲ್ಲಿ ಪ್ರಕಟಿಸಿದ ಮುಂಬಯಿ ಸರಕಾರದ ವರದಿಗಳು.

ಕ) ವಿಜಯನಗರ, ಮೊಘಲ್, ಬಹಮನಿ, ಶಾಹಿ ಹಾಗೂ ಮರಾಠರ ಇತಿಹಾಸದಲ್ಲಿ ಬರುವ ವಿಜಾಪುರ ಆದಿಲ್‌ಶಾಹಿಗಳ ಸಂದರ್ಭ ಉದಾ : ಬಖೈರುಗಳು, ಕೈಫಿಯತ್ತುಗಳು. ಮೊಘಲ್ ದೊರೆಗಳ ಆತ್ಮಚರಿತ್ರೆ, ಚರಿತ್ರೆಗಳು.

ಡ) ಸ್ಥಳೀಯ ಭಾಷೆಗಳಾದ ಕನ್ನಡ-ಮರಾಠಿಯಲ್ಲಿ ಲಭ್ಯವಿದ್ದ ಪುಸ್ತಕಗಳು-ಲೇಖನಗಳು.

**೨. ಇತರ ಸಾಧನೆಗಳು**

ಅ) ಮನೆತನಗಳ ಇತಿಹಾಸ, ವಿಶೇಷವಾಗಿ ಸಂಸ್ಥಾನಿಕರು, ಜಹಗೀರದಾರರು, ದೇಸಾಯಿ, ದೇಶಪಾಂಡೆ, ದೇಶಮುಖ, ಪೀರಜಾದೆ-ಮನೆತನದ ಕಾಗದ ಪತ್ರಗಳು.

ಬ) ಭಾರತ ಇತಿಹಾಸ ಸಂಶೋಧಕ ಮಂಡಳ ಪುಣೆ, ಕರ್ನಾಟಕ ಇತಿಹಾಸ ಸಂಶೋಧಕ ಮಂಡಳ ಧಾರವಾಡ ಹಾಗೂ ತಂಜಾವೂರು, ಧುಳೆ, ಜಯಪುರ ಗ್ರಂಥಾಲಯಗಳಲ್ಲಿ ಲಭ್ಯವಿದ್ದ ಮಾಹಿತಿ.

ಕ) ಪುಣೆ, ಮುಂಬಯಿ, ಬೆಂಗಳೂರು, ಮೈಸೂರು, ದೆಹಲಿ, ಕಲಕತ್ತಾ ಹಾಗೂ ಹೈದರಾಬಾದ್ ಪತ್ರಾಗಾರಗಳಲ್ಲಿ ಲಭ್ಯವಿದ್ದ ಮಾಹಿತಿ.

ಡ) ಗ್ಯಾಜಿಟಿಯರ್‌ಗಳ ಅಭ್ಯಾಸ.

೩ ಪ್ರಕಟಿತ ಪರ್ಶಿಯನ್ ಸಮಕಾಲೀನ ಸಾಹಿತ್ಯ ಕೃತಿಗಳಲ್ಲಿ ಬರುವ ಸಂದರ್ಭಗಳು, ಉದಾ-ಇಬ್ರಾಹಿಮ್‌ನಾಮಾ, ಮಹಮೂದನಾಮಾ, ಆಲಿನಾಮಾ, ಸಿಕಂದರನಾಮಾ, ಕಿತಾಬ-ಇ-ನೌರಸ್, ಖುಶನಾಮಾ, ಮನಲಗನ ಇತ್ಯಾದಿ.

೪ ಸ್ಥಳಿಯ ಭಾಷೆಗಳಲ್ಲಿ ಲಭ್ಯವಿದ್ದ ಪ್ರಕಟಿತ-ಅಪ್ರಕಟಿತ ಸಾಹಿತ್ಯಿಕ ಕೃತಿಗಳು.

ಅ) ಮಧ್ಯಕಾಲೀನ ಯುಗದ ಸಾಧು-ಸಂತರ ಪದ ಪದ್ಯಗಳು: ಕನ್ನಡ-ಮರಾಠಿ-ಹಿಂದಿ.

ಬ) ಇತರ ಕೃತಿಗಳು.

**೫) ಸಂಗ್ರಹಿಸಬಹುದಾದ ಜಾನಪದ ಸಾಹಿತ್ಯ**

ವಿಜಾಪುರ ಅದರ ಸುತ್ತ-ಮುತ್ತ ಹಾಗು ಅದರ ಪ್ರಭಾವವಿದ್ದ ಮುಸ್ಲಿಮರ ದೈನಂದಿನ ಕಾರ್ಯಕ್ರಮ ಹಾಗು ವಿಶಿಷ್ಟ ಸಂದರ್ಭಗಳಲ್ಲಿ ಹಾಡುವ ದಖಿಣಿ-ಉರ್ದು ಭಾಷೆಯ ಜಾನಪದ ಗೀತೆಗಳು. ಚಕ್ಕೀನಾಮಾ (ಬೀಸುವ ಕಲ್ಲಿನ ಪದ), ಚರಖಾನಾಮಾ (ನೂಲುವ ಪದ) ಸುಹಾಗನಾಮಾ (ಸೋಬಾನಪದ), ಶಾದಿನಾಮಾ (ಮದುವೆ ಹಾಡು) ಲೋರಿನಾಮಾ ಇತ್ಯಾದಿಗಳ ಸಂಗ್ರಹ ಹಾಗು ಅಭ್ಯಾಸ.

೬ **ಸ್ಥಳನಾಮಗಳ ಅಧ್ಯಯನ**

ವಿಜಾಪುರ ಹಾಗು ಅದರ ಸುತ್ತ ಮುತ್ತ ಮುಸ್ಲಿಮ ಪ್ರಭಾವದ ಹೆಸರುಗಳನ್ನು ಸೂಚಿಸುವ ಅನೇಕ ನಗರ ಗ್ರಾಮಗಳಿವೆ. ಉದಾ–ಮಹ್ಮದ ಪುರ, ಚಾಂದಪುರ, ಖತೀಜಾಪುರ, ತಾಜಪುರ, ಇಬ್ರಾಹಿಮಪುರ, ರಂಭಾಪುರ ಇತ್ಯಾದಿ ಸ್ಥಳ ನಾಮ ಮೂಲಗಳ ಅಭ್ಯಾಸ.

೭. ಬಾಯಿ ಮಾತಿನ ಇತಿಹಾಸ ಹಾಗು ದಂತಕಥೆ ಗಳು–ವಿಜಾಪುರ, ಗುಲಬರ್ಗಾ, ಹೈದರಾಬಾದ ಮುಂತಾದ ನಗರಗಳು, ಕೆಲವು ಹಳ್ಳಿಗಳಲ್ಲಿ ವಾಸಿಸುತ್ತಿರುವ ಹಿರಿಯ ಮನೆತನಗಳ ವೃದ್ಧರನ್ನು ಸಂದರ್ಶಿಸಿ ಐತಿಹಾಸಿಕ ಹಾಗು ಸಾಂಪ್ರದಾಯಿಕ ಆಖ್ಯಾಯಿಕೆಗಳನ್ನು ಪಡೆಯುವುದು.

ಹೀಗೆ ಸಂಗ್ರಹಿಸಿದ ಸಾಧನಗಳನ್ನು ಉದ್ದೇಶಿತ ವಿಷಯದ ಅಭ್ಯಾಸಕ್ಕೆ ಬಳಸಿಕೊಂಡಾಗ ಕೆಳಗಿನ ಕೆಲವು ಸಂಗತಿಗಳನ್ನು ಗಮನಿಸಬಹುದಾಗಿದೆ.

ಅ) ಸನದುಗಳು, ಫರ್ಮಾನುಗಳು, ಹಸ್ತಪ್ರತಿಗಳು ಹಾಗು ಅಭ್ಯಸಿಸದೆ ಇದ್ದ ವರದಿಗಳ ಅಧ್ಯಯನ ದಿಂದ ಆದಿಲಶಾಹಿಕಾಲದ ಇತಿಹಾಸಕ್ಕೆ ಸಂಬಂಧ ಪಟ್ಟ ಕೆಲವು ಹೊಸ ಐತಿಹಾಸಿಕ ಸಂಗತಿಗಳ ಹೊರ ಬೀಳುವಿಕೆ.

ಬ) ಈ ವರೆಗೆ ಗಮನ ಹರಿಸದ ಕನ್ನಡ, ಮರಾಠಿ, ಪರ್ಶಿಯನ್, ಸಂಸ್ಕೃತ ಹಾಗು ದಖಣಿ ಸಾಹಿತ್ಯಕ ಕೃತಿಗಳಲ್ಲಿರುವ ಪ್ರಮುಖ ಐತಿಹಾಸಿಕ ಮೂಲ ಗಳನ್ನು ಗುರುತಿಸುವುದು.

ಕ) ಈ ಹಿಂದೆ ಚರಿತ್ರೆಗಳಲ್ಲಿ ಸಾಧಾರಣವಾಗಿ ಕಂಡು ಬರುವ ರಾಜಕೀಯ ಕಲೆ, ವಾಸ್ತುಶಿಲ್ಪದ ಇತಿಹಾಸದ ಹೊರತಾಗಿ ಪ್ರಾದೇಶಿಕ ಭಾಷೆಗಳಲ್ಲಿ ದೊರೆಯುವ ಶ್ರೀಮಂತ ಮೂಲ ಸಾಧನಗಳ ಬಳಕೆ ಹಾಗು ಅದರಿಂದ ವಿವಿಧ ವಿಷಯಗಳ ಅಭ್ಯಾಸ.

ಒಟ್ಟಾರೆಯ ಅಭ್ಯಾಸದಿಂದ ಆದಿಲಶಾಹಿ ಕಾಲದ ಸಾಮಾಜಿಕ ಪರಿಸ್ಥಿತಿ ಅಥವ ಸಮಕಾಲೀನ ವಿವಿಧ ಮತ ಧರ್ಮ ಸಂಪ್ರದಾಯಗಳ ಮಧ್ಯದ ಸಂಬಂಧವನ್ನು ಗುರುತಿಸಬಹುದು. ಅದು ಇಂದಿನ ಕಾಲದ ಪರಿಸ್ಥಿತಿಗೆ ಸಂಗತವೂ ಆಗುವುದಲ್ಲದೆ ಈ ಅಭ್ಯಾಸದಿಂದ ಹೊರ ಬೀಳುವ ಕೆಲವು ಸಂಗತಿ ಗಳು ಪ್ರಸ್ತುತ ವಿವಿಧ ಸಮಾಜಗಳ ಸಾಮರಸ್ಯಕ್ಕೆ ಪೋಷಕವೂ ಆಗಬಹುದು.